# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly, KOPPA-CHM. ಫೋನ್ : 114

8ನೇ ವರ್ಷ 25ನೇ ಸಂಚಿಕೆ ಕೊಪ್ಪ 4-2-1990 ಭಾನುವಾರ ಬೆಲೆ 60 ಪೈಸೆ

ಶೃಂಗೇರಿ ಭಾಗದ ವಿದ್ಯುತ್ ಪೂರೈಕೆ ಸುಧಾರಣೆಯತ್ತ

## ಸದ್ಯವೇ 'ಮಾಸ್ಟರ್ ಯುನಿಟ್ ಸಬ್‌ಸೆಂಟರ್'

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ : ಈ ತಾಲ್ಲೂಕಿನ ವಿದ್ಯುತ್ ಪೂರೈಕೆ ಸುಧಾರಣೆಯತ್ತ ಕ. ವಿ. ಮಂ. ಒಂದು ಪ್ರಮುಖ ಹೆಜ್ಜೆ ಇಟ್ಟಿದೆ. ಸುಮಾರು ಒಂದೂವರೆಯಿಂದ 2 ಕೋಟಿ ರೂ. ಅಂದಾಜು ವೆಚ್ಚದ 'ಮಾಸ್ಟರ್ ಯುನಿಟ್ ಸಬ್ ಸೆಂಟರ್' ಮಂಜೂರಾಗಿದ್ದು, ಈ ವರ್ಷದ ಮಾರ್ಚ್ ತಿಂಗಳೊಳಗೆ ಕೆಲಸ ಪ್ರಾರಂಭವಾಗಲಿದೆಯೆಂದು ಶಿವಮೊಗ್ಗದ ಕ. ವಿ. ಮಂ ಸೂಪರಿಂಟೆಂಡಿಂಗ್ ಇಂಜಿನಿಯರ್ ಅವರು ತಾಲ್ಲೂಕಿನ ರೈತರ ನಿಯೋಗವೊಂದಕ್ಕೆ ತಿಳಿಸಿದ್ದಾರೆ.

ಬಾಳೆಹೊನ್ನೂರಿನಲ್ಲಿರುವಂಥದೇ ವಿದ್ಯುತ್ ನಿಯಂತ್ರಣಾ ವ್ಯವಸ್ಥೆ ಇದಾಗಿದ್ದು, ಇದಕ್ಕಾಗಿ ಈಗಾಗಲೇ ಜಾಗವೂ ಮಂಜೂರಾಗಿದೆ. ಇಲ್ಲಿನ ಕ ವಿ. ಮಂ ಶಾಖಾಧಿಕಾರಿ ಕೃಷ್ಣಮೂರ್ತಿ ಈ ಘಟಕದ ಯೋಜನೆ-ಅಂದಾಜು ಪತ್ರಗಳನ್ನು ಸಿದ್ಧಪಡಿಸಿ ಅದರ ಮಂಜೂರಾತಿಗೆ ಶ್ರಮಿಸಿದ್ದಾರೆ

### ಅಟೋ ಟ್ರಾನ್ಸ್‌ಫಾರ್ಮರ್

ಈ ಮಧ್ಯೆ, 6 ತಿಂಗಳ ಹಿಂದೆಯೇ ಇಲ್ಲಿಗೆ ಮಂಜೂರಾಗಿದ್ದ 'ಅಟೋ ಟ್ರಾನ್ಸ್‌ಫಾರ್ಮರ್' ಇದೀಗ ಕಾರ್ಯಾರಂಭ ಮಾಡಿರುವುದಾಗಿ ಕೃಷ್ಣಮೂರ್ತಿ ತಿಳಿಸಿದ್ದಾರೆ. ಇದು ಜಯಪುರ ಮತ್ತು ಕೊಪ್ಪ—ಈ ಎರಡೂ ವಿದ್ಯುತ್ ಮಾರ್ಗಗಳಿಗೆ ಸಂಪರ್ಕ ಕಲ್ಪಿಸಿ, ಒಂದು ಲೈನ್‌ನಲ್ಲಿ ವಿದ್ಯುತ್ ನಿಲುಗಡೆಯಾದರೆ ಮತ್ತೊಂದರಿಂದ ವಿದ್ಯುತ್ ಒದಗಿಸುತ್ತದೆ ಇದರಿಂದ ಈ ಭಾಗದ ಸುಮಾರು 75 ಭಾಗ ವಿದ್ಯುತ್ ಸಮಸ್ಯೆ ನಿವಾರಣೆಯಾಗುವುದೆನ್ನಲಾಗಿದೆ.

ಜಿಲ್ಲಾ ಪರಿಷತ್ ಹಣ ನುಂಗಲೊಂದು ನೆಪ 'ದುರಸ್ತಿ'? :

# ತುಂಬಿ ನಿಂತ ಕೆರೆಗೆ ತೂಬೇ ಇಲ್ಲ !

ಹಾಲ್ಮುತ್ತೂರು : ಕೊಪ್ಪ ತಾಲ್ಲೂಕಿನ ದೊಡ್ಡ ಕೆರೆಗಳಲ್ಲಿ ಒಂದೆನ್ನಲಾದ ಇಲ್ಲಿನ ಹೆಗ್ಗರೆಗೆ ಜಿಲ್ಲಾ ಪರಿಷತ್ ಇಂಜಿನಿಯರಿಂಗ್ ವಿಭಾಗದವರು ನಡೆಸಿರುವ "ದುರಸ್ತಿ" ಅವರ ಕಾರ್ಯವೈಖರಿಗೆ ಹಿಡಿದ ಸ್ವಚ್ಛ ಕನ್ನಡಿ ಎನ್ನಬಹುದು.

ಈ ಕೆರೆಗೆ ದಂಡೆಯ ಮಧ್ಯದಲ್ಲೊಂದು ಮುಖ್ಯ ತೂಬು, ದಂಡೆಯ ಮೂಲೆಯಲ್ಲೊಂದು—ಹೀಗೆ 2 ತೂಬುಗಳಿದ್ದುವು. ಮಧ್ಯದ ತೂಬನ್ನು ಈಗ್ಗೆ 2-3 ವರ್ಷದ ಹಿಂದೆ ಯಾರೋ ದುಷ್ಕರ್ಮಿಗಳು ಹಿಂಭಾಗದಿಂದ ಮರದ ಬೆಣೆ, ಸೈಜುಗಲ್ಲುಗಳಿಂದ 'ಭದ್ರವಾಗಿ' ಮುಚ್ಚಿಬಿಟ್ಟಿದ್ದಾರೆ

ಆದರೂ ರೈತರು ಮೂಲೆಯ ತೂಬಿನಿಂದ ನೀರು ಬಿಟ್ಟುಕೊಳ್ಳುತ್ತಿದ್ದರು. ಆದರೆ ಕಳೆದ ಏಪ್ರಿಲ್‌ನಲ್ಲಿ ಕೊಪ್ಪದ ಜಿ.ಪ ಇಂಜಿನಿಯರ್‌ಗಳು ಅದನ್ನು 'ದುರಸ್ತಿ' ಮಾಡಿ ಮುಚ್ಚಿಬಿಟ್ಟರು. ಆದರೆ ಮುಖ್ಯ ತೂಬನ್ನು ತೆರೆಯಲೂ ಇಲ್ಲ. ಅಲ್ಲೂ ಒಂದಷ್ಟು 'ದುರಸ್ತಿ' ಮಾಡಿ ಮೆಟ್ಟಿಲು ಕಟ್ಟಿಸಿಬಿಟ್ಟಿದ್ದಾರೆ.

ಆಗಲೇ ರೈತರು, ಮುಖ್ಯ ತೂಬು ತೆಗೆಯದೆ ಮೂಲೆಯ ತೂಬನ್ನು ಮುಚ್ಚದಂತೆ ತೀವ್ರವಾಗಿ ಪ್ರತಿಭಟಿಸಿದರು ಆದರೂ ಅಧಿಕಾರಿಗಳು ಜಗ್ಗಲಿಲ್ಲ. (16 4.89ರ 'ಮುಂಜಾವು' ನೋಡಿ).

ಈ ವಿಚಾರವನ್ನು ಅಂದು 'ಮುಂಜಾವು' ಕೊಪ್ಪದ ಜಿ ಪ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ಗೋಪಾಲಯ್ಯ ಅವರ ಗಮನಕ್ಕೆ ತಂದಾಗ, ತಾನು ಕೂಡಲೇ ಸ್ಥಳ ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳುವುದಾಗಿ ತಿಳಿಸಿದ್ದರು. **ಆಗಿನ್ನೂ ತೂಬು ಮುಚ್ಚುವ ಕೆಲಸ ಶುರುವಾಗಿತ್ತಷ್ಟೇ. ಆಗಲೇ ಅದೊಂದು ತೂಬನ್ನಾದರೂ ಖುಲ್ಲಾ ಉಳಿಸಬಹುದಿತ್ತು ಆದರೆ ಗೋಪಾಲಯ್ಯ ಆಡಿದ ಮಾತಿನಂತೆ ನಡೆಯಲಿಲ್ಲ**

ಈಗ ಈ ದೊಡ್ಡ ಕೆರೆಯಲ್ಲಿ ನೀರು ತುಂಬಿ ನಿಂತಿದೆ. ಬೇಸಿಗೆಯ ಬಿಸಿ ಏರುತ್ತಿದ್ದಂತೆ ಕೆಳಗಡೆ ಸುಮಾರು 60 ಎಕರೆ ಬಾಗಾಯ್ತು ಜಮೀನು ನೀರಿಗಾಗಿ ಬಾಯ್ಬಿಟ್ಟು ಕಾಯುತ್ತಿದೆ. ಈ ಕೆರೆಯಿಂದ ನೀರುಣ್ಣುತ್ತಿದ್ದ ಬೇರೆ ಹತ್ತಾರು ಎಕರೆ ಜಮೀನುಗಳೂ ಇವೆ. ಶಾಸಕರಿಗೆ, ಜಿ.ಪ. ಸದಸ್ಯರುಗಳಿಗೆ ಪದೇ ಪದೇ ವಿವರಿಸಿದರೂ, ದೂರಿತ್ತರೂ ಕಳೆದ ಸುಮಾರು ಒಂದು ವರ್ಷದಿಂದಲೂ ಈ ಸಮಸ್ಯೆ ಬಗೆ ಹರಿದಿಲ್ಲ ಎನ್ನುತ್ತಾರೆ ಈ ಭಾಗದ ಕಾಂಗ್ರೆಸ್ ಮುಂದಾಳು ಕೊಲ್ಲಪ್ಪಗೌಡ.

**ನೀರಾವರಿ ಕೆರೆಗೆ ಒಂದಾದರೂ ತೂಬು ಇರಬೇಕೆಂಬುದು 'ಕಾಮನ್ ಸೆನ್ಸ್' ಅಲ್ಲವೆ? ಇಂಥ ಪ್ರಾಥಮಿಕ ಪರಿಜ್ಞಾನವನ್ನೂ ಬದಿಗಿಟ್ಟು ನಡೆಸಿದ 'ದುರಸ್ತಿ' ಯಾರಿಗಾಗಿ, ಯಾತಕ್ಕಾಗಿ? ಸಂಬಂಧಿಸಿದವರೆಲ್ಲರ 'ಕಾಮನ್‌ಸೆನ್ಸ್'ಗೆ ಏನಾಗಿದೆ? ಎಂದು ರೈತರು ಕ್ರುದ್ಧರಾಗಿ ಕೇಳುತ್ತಿದ್ದಾರೆ.**

## ಪರಸ್ಪರ ಹೊಡೆದಾಟ

ಕೊಪ್ಪ: ಇಲ್ಲಿಗೆ ಸಮೀಪದ ಕಾಚಕಲ್ಲಿನಲ್ಲಿ ಗೇಣಿ ಜಮೀನು ವಿವಾದದ ಸಂಬಂಧವಾಗಿ ಕೊಪ್ಪದ ದಿ|| ಎಲ್ಲಪ್ಪ ಅವರ ಮಕ್ಕಳಾದ ವೆಂಕಟೇಶ್ ಮತ್ತಿತರರಿಗೂ, ಅವರ ಗೇಣಿದಾರರಾಗಿದ್ದ ಸುಂದರ ಪೂಜಾರಿ ಮತ್ತವರ ಕಡೆಯವರಿಗೂ ಭೀಕರ ಹೊಡೆದಾಟಗಳು ನಡೆದಿವೆ.

ಜ. 26ರಂದು ಸುಂದರ ಪೂಜಾರಿಯವರ ಮಗ ಶೇಖರ ಪೂಜಾರಿ, ಸೊಸೆ ಹಾಗೂ ಬಾಣಂತಿಯಾದ ಮಗಳ ಮೇಲೆ ವೆಂಕಟೇಶ್ ಮತ್ತಿತರರು ಮಾರಕ ಹಲ್ಲೆ ನಡೆಸಿದ್ದು, ಶೇಖರ ಇನ್ನೂ ಆಸ್ಪತ್ರೆಯಲ್ಲಿದ್ದಾರೆ. ಪ್ರತೀಕಾರವಾಗಿ ಜ 30ರ ಸಂಜೆ ಎಲ್ಲಪ್ಪನವರ ಹೆಂಡತಿ ಶಾರದಮ್ಮ, ಅವರ ತಮ್ಮ ಸುಬ್ರಹ್ಮಣ್ಯ, ಮಗ ರವಿ ಇವರುಗಳ ಮೇಲೆ ಭೀಕರ ಹಲ್ಲೆ ನಡೆದಿದೆ. ಸುಬ್ರಮಣ್ಯನಿಗೆ ಕಾಲೆಲ್ಲ ಫ್ರಾಕ್ಚರ್ ಆಗಿ ಮಣಿಪಾಲಕ್ಕೆ ದಾಖಲಿಸಲಾಗಿದೆ.

## ಕಳ್ಳಸಾಗಣೆ : ಗಂಧ ಸಹಿತ ಲಾರಿ ವಶ

### ಚಲಿಸುವ ಲಾರಿಯಿಂದಲೇ ಧುಮುಕಿ ಆರೋಪಿಗಳು ಪರಾರಿ!

ಕೊಪ್ಪ : ಇಲ್ಲಿನ ಅರಣ್ಯ ಸಂಚಾರಿ ದಳದ ವಲಯ ಅರಣ್ಯಾಧಿಕಾರಿ ಕೆ. ಬಿ. ಭಾಸ್ಕರ ನಾಯ್ಕ ಮತ್ತು ಸಿಬ್ಬಂದಿ ಜ. 26 ರ ಬೆಳಗಿನ ಜಾವ ಮಾಗುಂಡಿ ಸಮೀಪ ಗಂಧದ ಕಳ್ಳಸಾಗಣೆ ಮಾಡುತ್ತಿದ್ದ ಲಾರಿಯೊಂದನ್ನು ವಶಪಡಿಸಿಕೊಂಡಿದ್ದಾರೆ.

ಫಾರೆಸ್ಟರ್ ಟಿ ಜಯಪ್ಪ, ಗಾರ್ಡ್‌ಗಳಾದ ಪಿ. ಕೆ. ಜಾರ್ಜ್, ಸಿ. ಎಸ್. ಕೃಷ್ಣ, ಡಿ. ಲೋಬೋ, ನಸೀರುದ್ದೀನ್ ಮತ್ತು ಜೀಪ್ ಚಾಲಕ ಹನುಮಂತಪ್ಪ, ಇವರುಗಳಿದ್ದ ತಂಡ ಮಾಗುಂಡಿ–ಗಬ್‌ಗಲ್ ಮಧ್ಯೆ ಬೆಳಗಿನ ಜಾವ ಸಿಎಸ್‌ಜಿ 4455 ನಂಬರಿನ ಲಾರಿಯನ್ನು ಅನುಮಾನದ ಮೇಲೆ ನಿಲ್ಲಿಸಲು ಸೂಚಿಸಿದರೂ ಅದು ನಿಲ್ಲದೆ ವೇಗವಾಗಿ ಹೊರಟುಹೋದಾಗ ಜೀಪಿನಲ್ಲಿ ಬೆನ್ನಟ್ಟಿ ಬೆದರು ಗುಂಡು ಹಾರಿಸಲಾಗಿ, ಡ್ರೈವರ್ ಮತ್ತು ಲಾರಿಯಲ್ಲಿದ್ದ ಇನ್ನಿಬ್ಬರು ಆಸಾಮಿಗಳು ಕೂವೆಯ ಸಮೀಪ ಚಲಿಸುತ್ತಿದ್ದ ಲಾರಿಯಿಂದಲೇ ಧುಮುಕಿ ಪರಾರಿಯಾದರು.

70 ಸಾವಿರ ರೂ. ಬೆಲೆಯ ಗಂಧದೊಂದಿಗೆ ಲಾರಿಯನ್ನು ವಶಪಡಿಸಿಕೊಳ್ಳಲಾಗಿದೆ

## ಭೂಮಿಯ ಹಕ್ಕುಗಳಿಗಾಗಿ ದಲಿತರ ಧರಣಿ

ಕೊಪ್ಪ : ಕರ್ನಾಟಕ ದಲಿತ ಸಂಘರ್ಷ ಸಮಿತಿಯ ರಾಜ್ಯ ಮಂಡಳಿಯ ಕರೆಯಂತೆ, ಭೂರಹಿತ ಮತ್ತು ದಲಿತ ವರ್ಗಗಳಿಗೆ ಭೂಮಿಯ ಹಕ್ಕುಗಳಿಗಾಗಿ ಒತ್ತಾಯಿಸಿ ತಾಲ್ಲೂಕಿನ ವಿವಿಧೆಡೆಗಳ ಸುಮಾರು 200 ಮಂದಿ ದಲಿತರು ಜ. 30 ರಂದು ಘೋಷಣೆಗಳೊಂದಿಗೆ ತಾ|| ಕಛೇರಿಗೆ ಮೆರವಣಿಗೆಯಲ್ಲಿ ತೆರಳಿ, ಧರಣಿ ನಡೆಸಿದರು.

ತಹಸೀಲ್ದಾರ್‌ರವರ ಕೋರಿಕೆಯಂತೆ ಸಂಜೆ ಶಾಸಕ ಶಾಮಣ್ಣ ಅವರು ಧರಣಿಕಾರರನ್ನು ಭೇಟಿ ಮಾಡಿ ಮನವಿ ಪಡೆದು, ಸ್ಥಳೀಯ ಬೇಡಿಕೆಗಳ ಈಡೇರಿಕೆಗಾಗಿ ಕ್ರಮ ಕೈಗೊಳ್ಳಲು ಹಾಗೂ ಮನವಿ ಪತ್ರವನ್ನು ಸರ್ಕಾರಕ್ಕೆ ಕಳಿಸಿಕೊಡಲು ತಹಸೀಲ್ದಾರರಿಗೆ ಸೂಚಿಸಿದರು.

ಜ 31 ರಂದು ದ ಸಂ ಸ. ಕಾರ್ಯಕರ್ತರುಗಳು ತಹಸೀಲ್ದಾರ್‌ರನ್ನು ಭೇಟಿ ಮಾಡಿ, ಬೇಡಿಕೆಗಳ ಬಗ್ಗೆ ವಿಸ್ತಾರವಾಗಿ ಚರ್ಚಿಸಿದರು.

### ಪ್ರಮುಖ ಬೇಡಿಕೆಗಳು

ರಾಜ್ಯದಲ್ಲಿ ಭೂರಹಿತರು ಬಗರ್‌ಹುಕುಂ ಸಾಗುವಳಿ ಮಾಡಿರುವ ಎಲ್ಲ ಬಗೆಯ ಭೂಮಿಯನ್ನು ಅವರವರಿಗೇ ಖಾಯಂ ಮಾಡಿ, 1969ರ ಭೂ ಮಂಜೂರಾತಿ ಕಾನೂನನ್ನು ಜಾರಿಗೊಳಿಸಬೇಕು.

ದೊಡ್ಡ ಪ್ರಮಾಣದ ಒತ್ತುವರಿ ಪ್ಲಾಂಟೇಶನ್ ಭೂಮಿಗಳನ್ನು ಗುರ್ತಿಸಿ, ಅವನ್ನು ತೋಟಗಳಲ್ಲಿ ದುಡಿಯುವ ಕೃಷಿ ಕಾರ್ಮಿಕರಿಗೆ ಹಂಚಬೇಕು ಹಾಗೂ ಪ್ಲಾಂಟೇಶನ್ ಭೂಮಿಗಳಿಗೂ ಭೂಮಿತಿ ಶಾಸನ ತರಬೇಕು

ಪಶು ಸಂಗೋಪನೆಯ ಹೆಸರಲ್ಲಿ ಮೀಸಲಿರುವ ಸಹಸ್ರಾರು ಎಕರೆ ಕೃಷಿ ಯೋಗ್ಯ ಫಲವತ್ತಾದ 'ಅಮೃತ ಮಹಲ್ ಕಾವಲು' ಭೂಮಿಗಳನ್ನು ದಲಿತರಿಗೆ ಹಂಚಿ, ಪಶು ಸಂಗೋಪನೆ ಬಗ್ಗೆ ಸರ್ಕಾರ ದಲಿತರಿಗೆ ಮಾರ್ಗದರ್ಶನ ಮತ್ತು ಆರ್ಥಿಕ ನೆರವು ನೀಡಬೇಕು.

ಪರಭಾರೆ ನಿಷೇಧ ಕಾನೂನಿನಂತೆ ದಲಿತರಿಗೆ ಬಿಡಿಸಿಕೊಡಬೇಕಾದ ಭೂಮಿಗಳ ಬಗೆಗಿನ ಕ್ರಮವನ್ನು ಚುರುಕುಗೊಳಿಸಬೇಕು. ಇನ್ನೇ ಮುಂತಾದ ಬೇಡಿಕೆಗಳ ಬಗ್ಗೆ ಮನವಿಯನ್ನು ಸರ್ಕಾರಕ್ಕೆ ಕಳಿಸಿಕೊಡಲಾಯಿತು.

### ಸ್ಥಳೀಯ ಬೇಡಿಕೆಗಳು

ದಲಿತರಿಗೆ ಮತ್ತು ನಿವೇಶನ-ಮನೆಯಿಲ್ಲದ ಬಡವರ್ಗಗಳಿಗೆ ಶೀಘ್ರವಾಗಿ ಉಚಿತ ನಿವೇಶನಗಳನ್ನೂ, ಹೆಂಚು-ಸಾಟಿಗಳನ್ನೂ ವಿತರಿಸಬೇಕು. ಈ ಬೇಡಿಕೆ ಬಗ್ಗೆ ಬಿಡಿಒ ಅವರಿಂದ ಈಗಾಗಲೇ ತಾಲ್ಲೂಕಿನ ವಿವಿಧೆಡೆ 600ರಷ್ಟು ನಿವೇಶನಗಳ ಭೂಮಿಗಾಗಿ ಪ್ರಸ್ತಾಪ ಬಂದಿದ್ದು, 15 ದಿನದೊಳಗೆ ಅಗತ್ಯ ಕ್ರಮ ಕೈಗೊಳ್ಳುವುದಾಗಿ ತಹಸೀಲ್ದಾರ್ ಭರವಸೆಯಿತ್ತರು.

ದಲಿತರ ಅತ್ಯಾಚಾರವಾಗದಿರುವ [illegible] ಪ್ರಕರಣಗಳ ಬಗ್ಗೆ ಅರಣ್ಯ ಇಲಾಖೆ ಅಧಿಕಾರಿಗಳೊಂದಿಗೆ ಚರ್ಚಿಸಿ ಶೀಘ್ರ ಇತ್ಯರ್ಥಕ್ಕೆ ಕ್ರಮ ಕೈಗೊಳ್ಳುವುದಾಗಿಯೂ, ದಲಿತರಿಗೆ ಮಂಜೂರಾಗಿರುವ ಜಮೀನುಗಳಿಗಾಗಿ ನಡೆಯುತ್ತಿರುವ [illegible] ಕಾಮಗಾರಿಗಳು ದಲಿತರಿಗೆ [illegible] ಉಪಯೋಗವಾಗುವಂತೆ [illegible] ಕೊಡಲು ವ್ಯವಹರಿಸುವುದಾಗಿಯೂ ತಹಸೀಲ್ದಾರ್ ಭರವಸೆ ನೀಡಿದರು.

## ಪ್ರಾತ್ಯಕ್ಷಿಕೆ ಮತ್ತು ಸ್ಲೈಡ್ ಪ್ರದರ್ಶನಸಹಿತ ಕೊಪ್ಪದಲ್ಲಿ ಮತ್ತೊಮ್ಮೆ
# ನೈಸರ್ಗಿಕ ಕೃಷಿ ಬಗ್ಗೆ ಫಲಪ್ರದ ವಿಚಾರ ಸಂಕಿರಣ

ಕೊಪ್ಪ: ಇಲ್ಲಿನ ಸಿಂಡಿಕೇಟ್ ಬ್ಯಾಂಕ್, ಜೇಸೀಸ್ ಮತ್ತು ಕೃಷಿ ವಿಚಾರ ವಿನಿಮಯ ಕೇಂದ್ರಗಳು ಸಂಯುಕ್ತವಾಗಿ ಜನವರಿ 27 ಮತ್ತು 28 ರಂದು 'ನೈಸರ್ಗಿಕ ಕೃಷಿ'ಯ ಬಗ್ಗೆ ಏರ್ಪಡಿಸಿದ್ದ ವಿಸ್ತಾರವಾದ ವಿಚಾರ ಸಂಕಿರಣದಲ್ಲಿ, ಕಳೆದ ಡಿಸೆಂಬರ್ 24 ರಂದು ಈ ವಿಷಯದ ಬಗ್ಗೆ ಕೊಪ್ಪ, ತೀರ್ಥಹಳ್ಳಿ, ಶೃಂಗೇರಿ, ನ.ರಾ ಪುರ ತಾಲ್ಲೂಕುಗಳ ರೈತರ ಆಸಕ್ತಿ ಕೆರಳಿಸಿದ್ದ ಹುಬ್ಬಳ್ಳಿಯ ಯುವ ರೈತ ಪ್ರದೀಪ್ ತಪಸ್ ನೈಸರ್ಗಿಕ ಕೃಷಿಯಲ್ಲಿನ ತಮ್ಮ ಆಳವಾದ ಪರಿಶ್ರಮದ ಪರಿಚಯವನ್ನು ರೈತರಿಗೆ ಮತ್ತೊಮ್ಮೆ ಮನದಟ್ಟು ಮಾಡಿಕೊಟ್ಟರು.

ಮೊದಲ ದಿನ ಸ್ಲೈಡ್ ಪ್ರದರ್ಶನದೊಂದಿಗೆ ಮಲೆನಾಡ ಬೆಳೆಗಳಿಗೆ ಸಂಬಂಧಪಟ್ಟಂತೆ ಮಣ್ಣಿನ ಜೀವಂತಿಕೆಯನ್ನು ಕಾಪಾಡುವ ಪದ್ಧತಿಯನ್ನು ವಿವರಿಸಿದರು. ಜೀವ ಜಗತ್ತಿನಲ್ಲಿರುವ ಪರಸ್ಪರ ಅವಲಂಬನೆ ಮತ್ತು ಕೃಷಿಗೆ ಪೂರಕವಾಗಿರುವ ನೈಸರ್ಗಿಕ ಪ್ರಕ್ರಿಯೆಗಳನ್ನು ಹೇಗೆ ಏರುಪೇರು ಮಾಡದೇ ಸದುಪಯೋಗಪಡಿಸಿಕೊಳ್ಳಬಹುದು ಎಂಬುದನ್ನು ತಮ್ಮ ಸರಳ-ಸುಂದರ ಗ್ರಾಮ್ಯ ಭಾಷೆಯಲ್ಲಿ ವಿವರಿಸಿದ್ದು ತಪಸ್‌ರವರ ವೈಶಿಷ್ಟ್ಯ. ವೇದ ಕಾಲದಿಂದಲೂ ಪ್ರಚಲಿತವಿರುವ ಅಗ್ನಿಹೋತ್ರ ಆಚರಿಸಿ, ಓಜೋನ್ ಅನಿಲ ಉತ್ಪತ್ತಿ ಮಾಡುವುದರಿಂದ ವಾತಾವರಣವನ್ನು ಪರಿಶುದ್ಧಗೊಳಿಸುವ ವಿಧಾನವನ್ನು ಅಗ್ನಿಹೋತ್ರ ನೆರವೇರಿಸುವುದರೊಂದಿಗೆ ವಿವರಿಸಿದರು.

ಸಂಜೆ ಸ್ಲೈಡ್ ಪ್ರದರ್ಶನದೊಡನೆ, ಪಾಂಡಿಚೇರಿ ಹಾಗೂ ಉತ್ತರ ಕರ್ನಾಟಕದ ಹಲವೆಡೆ ಯಶಸ್ಸು ಪಡೆದ ನೈಸರ್ಗಿಕ ಕೃಷಿಯ ಗುಣಾತ್ಮಕ ಪರಿಣಾಮಗಳನ್ನು ಸಚಿತ್ರವಾಗಿ ವಿವರಿಸಿದರು. ಕೃಷಿಯಲ್ಲಿ ಹಸು-ಎತ್ತುಗಳ ಬಳಕೆಯ ಮಹತ್ವವನ್ನು ವಿವರಿಸಿದ ತಪಸ್, ನಮ್ಮ ನೆಲ-ಜಲಕ್ಕೆ ಹೊಂದಿಕೊಂಡಿರುವ ಭಾರತೀಯ ಹಸು ತಳಿಗಳಿಂದಲೇ ಉತ್ತಮ ಉತ್ಪಾದನೆಯನ್ನು ಹೊಂದುವ ಸಾಧ್ಯತೆಯನ್ನು ಮನಗಾಣಿಸಿದರು. ಗೋ ಸಂಪತ್ತಿನ ಜೊತೆ ನೊಳ, ಕೋಳಿ, ಮೀನು ಸಾಕಾಣಿಕೆಯನ್ನೂ ಕೃಷಿಗೆ ಪೂರಕವಾಗಿ ಬಳಸಿಕೊಂಡು, ಕಸದಿಂದ ರಸ ಸೃಷ್ಟಿಸುವ ಕಲೆ ವಿವರಿಸಿದರು.

28ರ ಭಾನುವಾರ ಬೆಳಿಗ್ಗೆ ಜೋಗಿಸರದ ಕೃಷ್ಣಮೂರ್ತಿಯವರ ತೋಟದಲ್ಲಿ ಅಡಿಕೆ ಕ್ಷಯಕ್ಕೆ ಕಾರಣವಾದ ಹಳದಿ ರೋಗದ ಮರಗಳನ್ನು ಪರಿಶೀಲಿಸಿದ ತಪಸ್ ನಂತರ ಸ್ಲೈಡ್ ಪ್ರದರ್ಶನದೊಡನೆ ನೈಸರ್ಗಿಕ ಮೂಲಗಳಿಂದಲೇ ಕೀಟ-ರೋಗಗಳ

(3ನೇ ಪುಟಕ್ಕೆ)

# 'ಹಾಸ್ಯ ಧಡಾಕಿಗಳ' ನರಸಿಂಹಮೂರ್ತಿ

ಗೆಳೆಯ ಎಚ್. ವಿ. ನರಸಿಂಹಮೂರ್ತಿ ನಮ್ಮ ಕೊಪ್ಪ ತಾಲ್ಲೂಕಿನವರು. ಹೊಸಕೊಪ್ಪ ಬಳಿಯ 'ಹಳೇಮಠ'ದವರು. ನನ್ನ ಹೈಸ್ಕೂಲು ಸಹಪಾಠಿ. ಅಂದಿನ ದಿನಗಳಲ್ಲಿ ನಮಗೆ ಸ್ವಲ್ಪ 'ಅಧಿಕ ಪ್ರಸಂಗಿ' ಎಂದೇ ಅನ್ನಿಸುವ ಮಟ್ಟಿಗೆ ಚುರುಕು ಮತ್ತು ಸರಸಿಯಾಗಿದ್ದ ಇವರು ಮುಂದೆ 'ಮಿಮಿಕ್ರಿ' ಯನ್ನೊಂದು ಹವ್ಯಾಸವಾಗಿಯೇ ಬೆಳೆಸಿಕೊಂಡರು.

ಇದೀಗ ಬೆಂಗಳೂರಿನಲ್ಲಿ ಪೋಲೀಸ್ ಇಲಾಖೆಯ ಲೆಕ್ಕ ಪತ್ರ ಶಾಖೆಯಲ್ಲಿ ಉದ್ಯೋಗಿಯಾಗಿರುವ ಇವರು, ಬೆಂಗಳೂರು ಸೇರುವ ಮುನ್ನ ಶಿವಮೊಗ್ಗ, ಚಿಕ್ಕಮಗಳೂರು, ತೀರ್ಥಹಳ್ಳಿಗಳೂ ಸೇರಿದಂತೆ ಮಲೆನಾಡಿನ ಈ ಭಾಗದಲ್ಲೆಲ್ಲ ತಮ್ಮ ಮಿಮಿಕ್ರಿಯಿಂದ ಸಾಕಷ್ಟು ಪರಿಚಿತರಾಗಿದ್ದವರು. ಬೆಂಗಳೂರು ಸೇರಿದ ನಂತರ ಅವರ ಈ ಕಲೆಗೆ ಇನ್ನಷ್ಟು ಮುಕ್ತ ವಾತಾವರಣ, ಗೊಬ್ಬರ-ನೀರಿನಂತೆ ದೊರೆತು ಇನ್ನೂ ಕ್ರಮಬದ್ಧವಾಗಿ ಅರಳಲು ಸಹಾಯಕವಾಯಿತು.

ಅಲ್ಲಿ 'ಹ್ಯೂಮರ್ ಕ್ಲಬ್' ಸದಸ್ಯರೂ ಆಗಿರುವ ನರಸಿಂಹ ಮೂರ್ತಿ ಈಚೆಗಷ್ಟೇ ರಾಜ್ಯ ಮಟ್ಟದ ಹಾಸ್ಯ ಸ್ಪರ್ಧೆಯೊಂದರಲ್ಲಿ ಬಹುಮಾನ ಗಿಟ್ಟಿಸಿದ್ದಾರೆ.

'ಮುಂಜಾವು' ಪುಟಗಳಲ್ಲಿ ಇನ್ನು ಮುಂದೆ ಇವರ ಸಂಗ್ರಹದ 'ಹಾಸ್ಯ ಧಡಾಕಿಗಳು' ಆಗಾಗ ಕಾಣಿಸಿಕೊಳ್ಳಲಿವೆ. 'ಹಾಸ್ಯಗಾರ'ನಾಗಿ ಇವರು ಈಗಾಗಲೇ ಹೆಸರು ಗಳಿಸಿದ್ದರೂ 'ಹಾಸ್ಯ ಬರಹಗಾರ'ನಾಗಿ ಇದು ಇವರ ಆರಂಭಿಕ ಯತ್ನ ಎಂದು ನನ್ನ ನಂಬಿಕೆ.

ಈ ಬಾಲ್ಯದ ಗೆಳೆಯನಿಗೆ ಶುಭ ಹಾರೈಸುತ್ತ, ಇವರ ಹಾಸ್ಯ ಧಡಾಕಿಗಳ ಒಂದೆರಡು 'ಸ್ಯಾಂಪಲ್'ಗಳನ್ನು ಇಲ್ಲಿ ನೀಡಿದ್ದೇನೆ. —ಸಿರಿಮನೆ ನಾಗರಾಜ್.

* * *

1. ಗುಂಡ : ಬಾರೋ, ಬೀರು ಕುಡಿದು ಬರೋಣ.

ತಿಮ್ಮ : ಇಲ್ಲ, ನಾನು ಕುಡಿಯುವುದನ್ನು ಬಿಟ್ಟಿದ್ದೀನಿ.

ಗುಂಡ : ನಿನ್ನೆ ತಾನೇ ಕುಡಿದಿದ್ದಿ....

ತಿಮ್ಮ : ನಾನು ಮೂರು ಕಾರಣಗಳಿಂದ ಕುಡಿಯುವುದನ್ನು ಬಿಟ್ಟಿದ್ದೀನಿ 1) ಒಳ್ಳೆಯ ಕೆಲಸಕ್ಕೆ ಹೋಗುವಾಗ ಕುಡಿಯುವುದಿಲ್ಲ 2) ನಾನು ಹೆಂಡತಿ ಮುಂದೆ ಪ್ರಮಾಣ ಮಾಡಿದ್ದೀನಿ, ಇನ್ನು ಮೇಲೆ ಕುಡಿಯುವುದಿಲ್ಲ ಅಂತ; 3 ನಿಯದಾಗಿ ನಾನು ಈಗ ಸಾಕಷ್ಟು ಕುಡಿದಿದ್ದೀನಿ, ಆದ್ದರಿಂದ ಕುಡಿಯುವುದಿಲ್ಲ.

.... .... ....

2. "ಉಭಯ ಜೀವಿಗೆ ಒಂದು ಉದಾಹರಣೆ ಕೊಡಿ" ಅಂತ ಮಾಸ್ತರು ಮುಂದಿನ ಸಾಲಿನ ನಾಲ್ಕು ಮಕ್ಕಳನ್ನು ಕೇಳಿದರು. 4ನೆಯವನು "ಕಪ್ಪೆ ಸಾರ್" ಅಂದ. "ಗುಡ್. ಉತ್ತರ ಸರಿಯಾಗಿದೆ. ಇನ್ನೂ ಒಂದು ಉದಾಹರಣೆ ಕೊಡು" ಎಂದು ಅತ ನನ್ನೇ ಕೇಳಿದಾಗ 'ಮತ್ತೊಂದು ಕಪ್ಪೆ ಸಾರ್!' ಎನ್ನಬೇಕೆ?

ಸಂಗ್ರಹ: **ಎಚ್.ವಿ ನರಸಿಂಹಮೂರ್ತಿ**




## ಮುದ್ದು ತಂಗಿ

ಎದ್ದು ಬಾರೆ ಮುದ್ದು ತಂಗಿ
ಆಟ ಆಡುವಾ
ಎಲ್ಲ ಚಿಂತೆ ಮರೆತು ನಾವು
ನಕ್ಕು ನಲಿಯುವಾ

ಹಕ್ಕಿ, ಚುಕ್ಕಿ, ಚಂದಮಾಮ
ತಂದುಕೊಡುವೆನು,
ನಗುವ ಗುಲಾಬಿ ನಿನ್ನ
ಮುಡಿಯಲಿಡುವೆನು.

ಏಕೆ ಕೋಪ ಜಾಣ ಮರಿ
ಮಾತು ಆಡೆಯಾ?
ಓಡಿ ಬಂದು ಅಣ್ಣನಿಗೆ
ಮುತ್ತು ನೀಡೆಯಾ?

ನಗುವ ಮರೆತು ಏಕೆ ಅಳುವೆ
ಚಾಕಲೇಟು, ಚೂಡಿದಾರ ನಿನಗೆ ಬೇಡವೆ?
ಪುಟ್ಟ ಮರಿಯೆ ಚಿಟ್ಟೆಯಂತೆ ನೀನು ಹಾರುತ
ನಲಿವು ನೀಡು ಅಣ್ಣನಿಗೆ
ನೋವು ಮರೆಸುತ

—'ಕೊರಠಿನಾ', ಕೊಪ್ಪ.

# ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ?

ಹನುಮ ಪಾರ್ವತಿಯ ಒಬ್ಬನೇ ಮಗ. ಹಾಗೆಂದೇ ಚಿಕ್ಕವನಿದ್ದಾಗಿನಿಂದ ಒಳ್ಳೇ ಮುದ್ದಿನಿಂದ ಸಲಹಿದ್ದಳು. ತಂದೆಯಿಲ್ಲದ ಮಗನೆಂದು ಒಂದು ಏಟೂ ಹಾಕದೇ ಅಟ್ಟಕ್ಕೇರಿಸಿದಳು. ಪೇಟೆಗೆ ಅಥವ ಹೊಲಕ್ಕೆ ಹೋದರೆ ಹನುಮನನ್ನು ಹೆಗಲಿಗೇರಿಸಿಕೊಂಡು ಹೋಗುತ್ತಿದ್ದಳು.

ಒಂದು ಸಲ ಹನುಮನನ್ನು ಹೆಗಲಿಗೇರಿಸಿಕೊಂಡು ಸಂತೆಗೆ ಹೋಗಿದ್ದಳು. ಸಂತೆ ಮುಗಿಸಿ ಬರುವಾಗ ಕಿತ್ತಳೆ ಹಣ್ಣನ್ನು ಹೊತ್ತ ಚೆನ್ನವ್ವ ಅವಳ ಜೊತೆಗೆ ಕೂಡಿಕೊಂಡಳು. ಚೆನ್ನವ್ವ-ಪಾರ್ವತಿ ಅದು-ಇದು ಮಾತಾಡುತ್ತಾ ಜೊತೆ ಜೊತೆಯಲ್ಲಿ ಹೆಜ್ಜೆ ಹಾಕುತ್ತಿದ್ದರು.

ಪಾರ್ವತಿಯ ಹೆಗಲ ಮೇಲೆ ಕುಳಿತಿದ್ದ ಹನುಮ ಮೆಲ್ಲನೆ ಚೆನ್ನವ್ವನ ಬುಟ್ಟಿಗೆ ಕೈ ಹಾಕಿ ಒಂದೆರಡು ಕಿತ್ತಳೆ ಹಣ್ಣನ್ನು ತಿಂದ. ಇದು ಚೆನ್ನವ್ವನಿಗೆ ತಿಳಿಯಲೇ ಇಲ್ಲ. ಹೀಗೆ ಅವಳಿಗೆ ಗೊತ್ತಾಗದಂತೆ ಹಣ್ಣನ್ನು ಲಪಟಾಯಿಸುವುದು ಅವನಿಗೆ ಮಜವೆನಿಸಿತು. ಮತ್ತೆ ಮತ್ತೆ ಕೈ ಹಾಕಿ ಅವಳಿಗೆ ಗೊತ್ತಾಗದಂತೆ ಕಿತ್ತಳೆ ಹಣ್ಣು ತೆಗೆದುಕೊಂಡು ತನ್ನ ತಾಯಿಯ ಬುಟ್ಟಿಗೆ ತುಂಬಿದ.

ಮನೆಗೆ ಬಂದ ಮೇಲೆ ಪಾರ್ವತಿ ನೋಡುತ್ತಾಳೆ. ತನ್ನ ಬುಟ್ಟಿಯಲ್ಲಿ ಅರ್ಧ ಡಜನ್ ಕಿತ್ತಳೆ ಹಣ್ಣು ಇವೆ! ಅವು ತನ್ನ ಬುಟ್ಟಿಗೆ ಹೇಗೆ ಬಂದವು ಎಂದು ತಿಳಿದು ಹೋಯಿತು. ಮಗನನ್ನು 'ಜಾಣ ಮರಿ' ಎನ್ನುತ್ತ ಮುದ್ದು ಮಾಡಿದಳು. ಇದರಿಂದ ಹನುಮ ಉತ್ತೇಜಿತನಾದ. ಮುಂದೆ ಹುಡುಗರ ಪೆನ್ಸಿಲ್ ಕದ್ದಾಗ, ಅಂಗಡಿಯಲ್ಲಿ ಪೀಪಿ ಕದ್ದಾಗ ಪಾರ್ವತಿ ಇದೇ ರೀತಿ 'ಶಹಬ್ಬಾಸ್ ಗಿರಿ' ಕೊಟ್ಟಿದ್ದಳು.

ಹನುಮ ದೊಡ್ಡವನಾದಂತೆ ಕಳ್ಳತನದಲ್ಲಿ ಪಳಗಿಬಿಟ್ಟ. ಯಾರದೋ ಹೊಲದಲ್ಲಿ ಹತ್ತಿ ಕದ್ದರೆ, ಮತ್ಯಾರದೋ ಹೊಲದಲ್ಲಿ ಮೆಣಸಿನಕಾಯಿ ಕದ್ದ. ಹಲವರು ಬಂದು ಪಾರ್ವತಿಯಲ್ಲಿ ದೂರಿದಾಗ ಅವಳಿಗೆ ಅರಿವಾಯಿತು. ಕಳ್ಳತನ ಮಾಡಬಾರದೆಂದು ಮಗನಿಗೆ ಬುದ್ಧಿ ಹೇಳಿದಳು. ಆದರೆ ಹನುಮ ಅವಳ ಹಿತವಚನವನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ದೊಡ್ಡವನಾದಂತೆ ಕುಪ್ರಸಿದ್ಧ ಕಳ್ಳನಾದ.

ಆದರೆ ಕಳ್ಳತನ ಮಾಡುವವನು ಪೋಲೀಸರ ಕೈಗೆ ಸಿಕ್ಕದೇ ಎಷ್ಟು ದಿವಸ ಉಳಿಯಲಿಕ್ಕಾದೀತು? ಒಮ್ಮೆ ದೊಡ್ಡ ಕಳ್ಳತನವೊಂದರಲ್ಲಿ ಪೋಲೀಸರ ಕೈಗೆ ಸಿಕ್ಕಿಯೂ ಬಿದ್ದ. ಇದನ್ನು ನೋಡಿ ಪಾರ್ವತಿ ಎದೆ ಎದೆ ಬಡಿದುಕೊಂಡು ಅತ್ತಳು.

'ಮಕ್ಕಳು ಸಣ್ಣವರಿದ್ದಾಗಲೇ ಅವರಿಗೆ ಒಳ್ಳೆಯ ನಡೆ ನುಡಿ ಕಲಿಸಿ ಬೆಳಸಬೇಕೇ ಹೊರತು ದೊಡ್ಡವರಾದ ಮೇಲಲ್ಲ' ಎಂದು ಅವಳಿಗೆ ತಿಳಿಯುವಾಗ ತುಂಬ ತಡವಾಗಿತ್ತು !

—**ಕೆ. ಶೇಷಾಚಲರಾವ್**, ಕುರುಕವಳ್ಳಿ.

## ಪುಟ್ಟಿಯ ಕವನ

ಪುಟ್ಟಿ ಕವನ
ಬರೆಯಲೆಂದು
ಕುಳಿತುಕೊಂಡಳು

ಅತ್ತು ಅತ್ತು
ಕಡ್ಡಿ ಪೆನ್ನು
ಬಿಳಿಯಹಾಳೆ ಪಡೆದಳು.

ಹರಿವ ನದಿಯ
ಊರ ಕೆರೆಯ
ತನ್ನ ಮನೆಯ ಬಗ್ಗೆಯೇ
ಕವನ ಬರೆವೆನೆಂದಳು

ಅತ್ತ ದುಃಖ ಅರ್ಧವಾಗಿ
ಬರೆವ ವಿಷಯ
ಮರೆತೇ ಹೋಗಿ
ತಲೆ ಕೆರೆದುಕೊಂಡಳು.

ಹೊಳೆದ ವಿಷಯ ಬರೆಯದಾಗಿ,
ಹೊಸತು ವಿಷಯ ಹೊಳೆಯದಾಗಿ
ಸುಮ್ಮನಾದಳು.

ಶಾಂತಿ ಮನಸು ಬರಲಿ ನನಗೆ
ದೀರ್ಘ ಕವನ ಬರೆವೆನೆಂದು
ಆಟಕೆದ್ದಳು.

**ಬಾಣಂತಿ ಪ್ರಕಾಶ್**, ಕುಡಿನಳ್ಳಿ

## ಓದುಗರ ಪತ್ರಗಳು

### ಜನೋಪಕಾರಿಯ ಮೇಲೆ ಹಲ್ಲೆ: ತೆಂಗಿನಮನೆಯಲ್ಲಿ ಆತಂಕದ ವಾತಾವರಣ

ಕೊಪ್ಪ ತಾಲ್ಲೂಕಿನ ತೆಂಗಿನಮನೆಯಲ್ಲಿ ಕೆಲವು ಸಮಾಜ ಘಾತಕ ವ್ಯಕ್ತಿಗಳು ಈಚೆಗೆ ಪ್ರಭಾಕರ ಪೂಜಾರಿ ಎಂಬವರ ಮೇಲೆ ಕತ್ತಿ, ದೊಣ್ಣೆ, ಜೈನ್‌ಗಳಿಂದ ಸಾರ್ವಜನಿಕರ ಎದುರಲ್ಲೇ ಹಲ್ಲೆ ಮಾಡಿ ಗಾಯಗೊಳಿಸಿರುವ ದುರ್ಘಟನೆ ನಡೆದಿದೆ. ಅವರನ್ನು ಕೊಪ್ಪ ಸರ್ಕಾರಿ ಆಸ್ಪತ್ರೆಗೆ ದಾಖಲಿಸಿ, ಚಿಕಿತ್ಸೆಯ ನಂತರ ಬಿಡುಗಡೆ ಮಾಡಲಾಗಿದ್ದು, ಇದಕ್ಕೆ ಸಂಬಂಧಿಸಿದಂತೆ ಪೋಲೀಸರು ಮೊಕದ್ದಮೆಯೊಂದನ್ನೂ ದಾಖಲಿಸಿಕೊಂಡಿದ್ದಾರೆನ್ನಲಾಗಿದೆ

ಸಾಮಾಜಿಕ ಕೆಲಸ ಕಾರ್ಯಗಳನ್ನು ಮಾಡುತ್ತ ಬಹಳಷ್ಟು ಮಂದಿಗೆ ಸಹಾಯ ಮಾಡುತ್ತಿದ್ದ ಪ್ರಭಾಕರ ಅವರ ಮೇಲಿನ ಈ ಹಲ್ಲೆ ಈ ಭಾಗದ ಜನರಿಗೆ ಬಹಳ ನೋವನ್ನುಂಟು ಮಾಡಿದೆ. ತುಂಬಾ ಶಾಂತಿಯುತ ವಾತಾವರಣ ಹೊಂದಿದ್ದ ಈ ಪುಟ್ಟ ಹಳ್ಳಿಯಲ್ಲಿ ಕೆಲ ಕಾಲದಿಂದೀಚೆಗೆ ಇಂತಹ ಕೆಲವು ದುರ್ಘಟನೆಗಳು ನಿರಂತರವಾಗಿ ನಡೆದಿದ್ದು, ಜನ ಈ ಬಗ್ಗೆ ಬಹಳ ಆತಂಕಗೊಂಡಿದ್ದಾರೆ.

**ಗ್ರಾಮಸ್ಥರು,**
ತೆಂಗಿನಮನೆ.

## "ಅಶಕ್ತ ಬಡವನಿಗೆ ನೆರವಾದವರ ಚೈತನ್ಯ, ಕೀರ್ತಿ ಹೆಚ್ಚಲಿ"

ಪ್ರಿಯರೆ,

ನಾನು ಪಾರ್ಶ್ವವಾಯು ಪೀಡಿತನಾಗಿ ದುಡಿಯಲು ಶಕ್ತಿ ಇಲ್ಲದೆ, ಕೊಪ್ಪ ಪೇಟೆಯಲ್ಲಿ ಕರ್ನಾಟಕ ರಾಜ್ಯದ ಲಾಟರಿ ಟಿಕೇಟು ಮಾರಾಟ ಮಾಡಿಕೊಂಡು ಜೀವನ ನಡೆಸಿಕೊಂಡಿದ್ದೇನೆ. ಕೊಪ್ಪ ಗ್ರಾಮದ ಹುಲ್ಲುಮಗ್ಗೆಯಲ್ಲಿ ನನಗೆ ಮಂಜೂರಾಗಿದ್ದ ನಿವೇಶನದಲ್ಲಿ ನಾನೊಂದು ಪುಟ್ಟ ಮನೆ ಕಟ್ಟಿಕೊಂಡು ವಾಸವಾಗಿದ್ದು, ಅದಕ್ಕೆ ಶಂಕರ್ ಕಂಪೆನಿಯವರು ಉದಾರವಾಗಿ ಧನ ಸಹಾಯ ಮಾಡಿದ್ದರು.

1989ರ ಡಿಸೆಂಬರ್ ತಿಂಗಳಲ್ಲಿ ನನ್ನ ಈ ಮನೆ ಆಕಸ್ಮಾತ್ತಾಗಿ ಜರಿದು ಬಿದ್ದಿತು. ಆರ್ಥಿಕವಾಗಿ ಸಬಲನಲ್ಲದ ನಾನು ಮನೆ ದುರಸ್ತಿಗಾಗಿ ಸಂಬಂಧಪಟ್ಟ ಮಂಡಲ ಪಂಚಾಯಿತಿ, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ಮತ್ತು ಶೃಂಗೇರಿ ಕ್ಷೇತ್ರದ ಶಾಸಕರಲ್ಲಿ ನೆರವು ಕೋರಿ ಅರ್ಜಿ ಸಲ್ಲಿಸಲಾಗಿ ಯಾರಿಂದಲೂ ನೆರವಾಗಲೀ ಪ್ರೋತ್ಸಾಹವಾಗಲೀ ದೊರೆಯಲಿಲ್ಲ. ಇದರಿಂದ ದಿಕ್ಕು ತೋಚದಂತಾಗಿದ್ದ ಸಮಯದಲ್ಲಿ, ಇದೇ ತಾಲ್ಲೂಕಿನ ತೆಂಗಿನಮನೆ ಸ್ಟಾರ್ ಸ್ಪೋರ್ಟ್ಸ್ ಅಸೋಸಿಯೇಷನ್ ಅಧ್ಯಕ್ಷರಾದ ಶ್ರೀ ಅನಿಲ್ ಕುಲಾಸೋರವರು ತಮ್ಮ ಸಂಘದ ಮತ್ತು ಕೊಪ್ಪದ ಫ್ರೆಂಡ್ಸ್ ಕ್ರಿಕೆಟ್ ಅಸೋಸಿಯೇಶನ್‌ನ ಸುಮಾರು 50-60 ಜನ ಉತ್ಸಾಹೀ ಯುವಕರ ಜೊತೆ ಬಂದು ಮನೆಯನ್ನು ಸಂಪೂರ್ಣವಾಗಿ ದುರಸ್ತಿ ಮಾಡಿಸಿಕೊಟ್ಟರು. ಈ ಸಹಾಯಕ್ಕಾಗಿ ಈ ಎಲ್ಲಾ ಯುವಕರಿಗೂ ನಾನು ಚಿರಋಣಿಯಾಗಿರುತ್ತೇನೆ.

ಅಧಿಕಾರಿಗಳ ಅಥವಾ ಜನಪ್ರತಿನಿಧಿಗಳ ಸಹಾಯ ಸಿಕ್ಕದೆ ಹೋದಾಗ ನನ್ನಂಥ ಅಶಕ್ತನ ನೆರವಿಗೆ ಬಂದ ಈ ಯುವಕರ ಕೀರ್ತಿ, ಚೈತನ್ಯ ಇನ್ನೂ ಹೆಚ್ಚಿ, ನನ್ನಂಥ ಇನ್ನೂ ಎಷ್ಟೋ ಜನ ಅಶಕ್ತರಿಗೆ ಇವರಿಂದ ಸಹಾಯವಾಗಲೆಂದು ಹಾರೈಸುತ್ತೇನೆ. ಹಾಗೆಯೇ ಈ ಯುವಕರ ಕಾರ್ಯವನ್ನು ಕಂಡು ಸ್ವಯಂಪ್ರೇರಿತರಾಗಿ ಅವರೊಡಗೂಡಿ ಸಹಾಯ ಮಾಡಿದ ಎಲ್ಲಾ ಸಾರ್ವಜನಿಕರಿಗೂ ನಾನು ಋಣಿಯಾಗಿರುತ್ತೇನೆ. ಹಾಗೂ ಅವರೆಲ್ಲರಿಗೂ ಒಳ್ಳೆಯದಾಗಲೆಂದು ಹಾರೈಸುತ್ತೇನೆ.

**—ಎಂ. ವಿ. ಸೂರ್ಯನಾರಾಯಣ,**
ಹುಲ್ಲುಮಗ್ಗೆ, ಕೊಪ್ಪ.

## ವಿದ್ಯುಚ್ಛಕ್ತಿಯ ಕಣ್ಣಾಮುಚ್ಚಾಲೆ ಆಟ!

ಪ್ರಿಯರೆ,

ಕಮ್ಮರಡಿ ಪ್ರದೇಶದಲ್ಲಿ ಈಗ್ಗೆ ಕೆಲವು ತಿಂಗಳಿನಿಂದ ವಿದ್ಯುಚ್ಛಕ್ತಿಯ ಕಣ್ಣಾಮುಚ್ಚಾಲೆ ಆಟ ಬಹಳ ಹೆಚ್ಚಾಗಿದೆ. ಬಂಡಿಗಡಿ–ಕಮ್ಮರಡಿ ಲೈನ್ ಈ ಮೊದಲು ತೀರ್ಥಹಳ್ಳಿಗೆ ಸೇರ್ಪಡೆಯಾಗಿತ್ತು. ಈಚೆಗೆ ಅದು ಕೊಪ್ಪಕ್ಕೆ ಸೇರಿದಂದಿನಿಂದ ಈ ಭಾಗದವರು ವಿದ್ಯುತ್ತನ್ನು ನೋಡುವುದೇ ಬಹಳ ಅಪರೂಪವಾಗುತ್ತಿದೆ. ಹಗಲಂತೂ ಯಾವಾಗಲೂ ಎಂಬಂತೆ ವಿದ್ಯುತ್ ಇರುವುದೇ ಇಲ್ಲ. ರಾತ್ರಿಯೂ ಸಹ ಬರುವುದು–ಹೋಗುವುದು ನಡೆಯುತ್ತಲೇ ಇರುತ್ತದೆ. ಇದರಿಂದ ಗ್ರಾಹಕರು ತುಂಬಾ ಬೇಸತ್ತಿದ್ದಾರೆ.

ವಿದ್ಯುತ್ ಪೂರೈಕೆ ವ್ಯವಸ್ಥೆ ಹೀಗಿದ್ದರೂ ಸಹ; ಗ್ರಾಹಕರು ಬಿಲ್ ಹಣವನ್ನು ಮಾತ್ರ ಕರಾರುವಾಕ್ಕಾಗಿ ಕಟ್ಟುವುದಕ್ಕೆ ಯಾವ ವಿನಾಯಿತಿ/ರಿಯಾಯಿತಿಗಳೂ ಇಲ್ಲ! ಕ. ವಿ. ಮಂಡಳಿಯವರು ಜನರಿಗೆ ವಿದ್ಯುಚ್ಛಕ್ತಿಯ ಈ ಕಣ್ಣಾಮುಚ್ಚಾಲೆ ಆಟದಿಂದ ತೊಂದರೆಯಾಗುತ್ತಿರುವುದನ್ನು ಏಕೆ ಗಂಭೀರವಾಗಿ ಪರಿಗಣಿಸುತ್ತಿಲ್ಲವೋ ಗೊತ್ತಿಲ್ಲ.

ಇನ್ನು ಮುಂದಾದರೂ ಸಂಬಂಧಪಟ್ಟವರು ಈ ಬಗ್ಗೆ ಸೂಕ್ತ ಕ್ರಮ ಕೈಗೊಂಡು ವಿದ್ಯುತ್ ಗ್ರಾಹಕರಿಗಾಗುತ್ತಿರುವ ತೊಂದರೆಯನ್ನು ತಪ್ಪಿಸಿಯಾರೆಂದು ಆಶಿಸೋಣವೇ?

**—ಚಾನಲ್ಮನೆ ಸುರೇಶ್ ನಾಯಕ್**

### ಕೆ.ಇ.ಬಿ.ಗೊಂದು ಪತ್ರ

ಪ್ರಿಯರೆ,

ಯಾವ ಊರಿನಲ್ಲಿಯೂ ಇಲ್ಲದ ನಿಯಮಗಳು ಬಸರಿಕಟ್ಟೆಗೆ ಅನ್ವಯವಾಗುತ್ತಿವೆ. ಸಂಪ್ರದಾಯವಾಗಿಬಿಟ್ಟಿದೆಯೋ ಎನ್ನಿಸುತ್ತದೆ. ಎಲ್ಲಿಯೂ ಇಲ್ಲದ ಪವರ್ ಕಟ್ ಬಸರಿಕಟ್ಟೆಯಲ್ಲಿ ಮನಬಂದಂತೆ ನಡೆಯುತ್ತಿದೆ. ಯಾವುದೇ ರೀತಿಯ ಕಾಲದ ನಿಯಮಾವಳಿ ಇಲ್ಲದೆ, ಮನಸ್ಸಿಗೆ ಬಂದಾಗ ವಿದ್ಯುತ್ ಕೊಡುವುದು, ಬಿಡುವುದು ನಡೆಯುತ್ತಿದೆ. ನಮ್ಮ ಮಕ್ಕಳ ವಾರ್ಷಿಕ ಪರೀಕ್ಷೆಗಳು ಸಮೀಪಿಸುತ್ತಿದ್ದು, ಈ ರೀತಿ ಬೇಕಾಬಿಟ್ಟಿ ಪವರ್‌ಕಟ್ ಮಾಡುವುದರಿಂದ ಅವರ ಓದುವ ತನಕವೆಲ್ಲ ನೀರಿನಲ್ಲಿ ಹೋಮ ಮಾಡಿದಂತೆ ಆಗುತ್ತಿದೆ. ರಾತ್ರಿಯಲ್ಲಿ ವಿದ್ಯುತ್ ಇಲ್ಲದೆ ಹಗಲಿನಲ್ಲಿ ಕೊಡುವ

(4ನೇ ಪುಟಕ್ಕೆ)

## ಡಿ.ಡಿ.ಟಿ. ಸಿಂಪರಣೆಗೆ ಆಗ್ರಹದ ಬದಲು ನಮ್ಮ ಮನೆ-ಪರಿಸರ ಶುಚಿಯಾಗಿಡೋಣ

ಪ್ರಿಯರೆ,

14-1-90ರ ನಿಮ್ಮ ಪತ್ರಿಕೆಯಲ್ಲಿ 'ಡಿ. ಡಿ. ಟಿ. ಸಿಂಪರಣೆ ಮಾಡಬೇಕೆಂದು ಓದುಗರೊಬ್ಬರು ಬರೆದಿರುವುದಕ್ಕೆ ಈ ಪ್ರತಿಕ್ರಿಯೆ.

ಮಲೇರಿಯ ಕಾಯಿಲೆಗೆ ಕಾರಣವಾದ ಪ್ಲಾಸ್ಮೋಡಿಯಂ ಎಂಬ ಏಕಾಣು ಜೀವಿಯನ್ನು ಅನಾಫಿಲೀಸ್ ಎಂಬ ಹೆಣ್ಣು ಸೊಳ್ಳೆ ಹರಡುತ್ತದೆ. ಈ ಸೊಳ್ಳೆ ಬದುಕುವ ಮತ್ತು ವಂಶಾಭಿವೃದ್ಧಿ ಮಾಡುವ ಸ್ಥಳಗಳೆಂದರೆ, ಗುಂಡಿಯಲ್ಲಿ ನಿಂತ ನೀರು, ಬಚ್ಚಲು ನೀರು ಹರಿವ ಸ್ಥಳ, ಶುಚಿಯಾಗಿಲ್ಲದ ದನದ ಕೊಟ್ಟಿಗೆ ಮುಂತಾದುವು. ನಾವು ನಮ್ಮ ಮನೆಯ ಸುತ್ತಮುತ್ತಲಿನ ಇಂಥ ಸ್ಥಳಗಳನ್ನು ಶುಚಿಯಾಗಿಟ್ಟುಕೊಂಡರೆ, ಸೊಳ್ಳೆಗಳಿಗೆ ಬೇಕಾದ ವಾತಾವರಣವೇ ಇಲ್ಲವಾಗಿ, ನಾವು ಮಲೇರಿಯ, ಸೊಳ್ಳೆ ಮತ್ತು ಡಿಡಿಟಿ—ಈ ಎಲ್ಲವುಗಳಿಂದಲೂ ಮುಕ್ತರಾಗಬಹುದು.

ಏಕೆಂದರೆ, ಡಿಡಿಟಿ ಸೊಳ್ಳೆಗಳಿಗೆ ಮಾತ್ರವಲ್ಲ, ಮನುಷ್ಯ ಮತ್ತು ಇತರ ಜೀವಿಗಳಿಗೂ ತೀವ್ರ ಹಾನಿಕರ. ಡಿಡಿಟಿಯ ಅಣುಗಳು ನಮ್ಮ ರಕ್ತದಲ್ಲಿ ಸೇರಿ 3-4 ತಲೆಮಾರುಗಳವರೆಗೂ ಅವು ಇತರ ರೋಗಗಳಿಗೆ ಕಾರಣವಾಗುತ್ತವೆ.

ಸಂಬಂಧಪಟ್ಟವರು ಡಿಡಿಟಿ ಸಿಂಪರಣೆ ಮಾಡದಿರುವುದಕ್ಕೆ ಕಾರಣ ಗೊತ್ತಿಲ್ಲ. ಆದರೆ, ನಾವೇ ನಮ್ಮ ಪರಿಸರವನ್ನು ಚೊಕ್ಕಟವಾಗಿಟ್ಟುಕೊಳ್ಳುವುದರಿಂದ ಈ ಎಲ್ಲದರ ಅನಾಹುತಗಳಿಂದಲೂ ಬಿಡುಗಡೆ ಪಡೆಯಬಹುದು.

**—ಕೆ. ಎನ್. ರಾಜೇಂದ್ರ,**
ಬಿಂತ್ರವಳ್ಳಿ.

## ನೈಸರ್ಗಿಕ ಕೃಷಿ ಬಗ್ಗೆ ಫಲಪ್ರದ ವಿಚಾರ ಸಂಕಿರಣ

(2ನೇ ಪುಟದಿಂದ)

ನಿಯಂತ್ರಣವನ್ನು ಸಚಿತ್ರನಾಗಿ ವಿವರಿಸಿದರು. 'ಹೈಡ್ರೋಪೋನಿಕ್ಸ್' ಕೃಷಿ ವಿಧಾನದಿಂದ ಕಡಿಮೆ ಸ್ಥಳದಲ್ಲಿ ಅಧಿಕ ಇಳುವರಿ ಪಡೆಯುವ ವಿಧಾನವನ್ನು, 'ಕೃಷಿ ಅರಣ್ಯ'ದ ಉಪಯೋಗವನ್ನೂ, ಬದಲಿ ಇಂಧನ ಮೂಲಗಳಾದ ಸೌರ ಶಕ್ತಿ, ಗಾಳಿಯ ಶಕ್ತಿಯ ವಿವರಗಳನ್ನೂ ಪರಿಚಯಿಸಿದರು.

ಕೊನೆಯಲ್ಲಿ, ರೈತ ತನ್ನ ಹೊಲ-ತೋಟ–ಗೋ ಸಂಪತ್ತನ್ನು ಪ್ರೀತಿಸಿ ಪೋಷಿಸಿದರೆ ಮಾತ್ರ ಉದ್ಧಾರವಾಗಬಲ್ಲನು ಎಂದು ಮಣ್ಣು ಮತ್ತು ರೈತನಿಗಿರುವ ಭಾವನಾತ್ಮಕ ನಂಟನ್ನು ತಿಳಿಸಿ, ರೈತ ತನ್ನ ಉದ್ಯೋಗದಲ್ಲಿ ಸ್ವಾಭಿಮಾನವನ್ನು ಬೆಳೆಸಿಕೊಳ್ಳಬೇಕೆಂದು ಕರೆಯಿತ್ತರು. ಈ ಮಾರ್ಗದಲ್ಲಿ ಪೂರ್ಣ ಸ್ವಾವಲಂಬಿಯಾಗುವ ರೈತ ಸಾಲಗಾರನಾಗಲು ಅವಕಾಶವೇ ಇಲ್ಲವೆಂಬುದನ್ನು ಮನದಟ್ಟು ಮಾಡುತ್ತಾ, ಹಾಗಾದಾಗ ರೈತ 'ಸಾಲ ಮನ್ನಾ'ದಂತಹ ವಿವಾದಾತ್ಮಕ ವಿಚಾರಕ್ಕೆ, ಹಾಗೂ ಅಪಖ್ಯಾತಿಗೆ ಈಡಾಗುವ ಸಂಭವವೇ ಇಲ್ಲವೆಂದು ವಿವರಿಸಿದರು

ಈ ಕಾರ್ಯಕ್ರಮದಲ್ಲಿ ಸುಮಾರು 100 ಜನ ರೈತರು ಎರಡೂ ದಿನ ತುಂಬು ಉತ್ಸಾಹದಿಂದ ಭಾಗವಹಿಸಿದರು. ಅವರೆಲ್ಲರ ಪರವಾಗಿ ತೀರ್ಥಹಳ್ಳಿಯ ಪುರುಷೋತ್ತಮ ರಾವ್ ಸ್ಪಂದಿಸುತ್ತಾ ತಪಸ್‌ರವರು ತಿಳಿಸಿದ ಅನೇಕ ವಿಚಾರಗಳನ್ನು ನೆರೆದ ಎಲ್ಲಾ ರೈತರೂ ಅನುಷ್ಠಾನಗೊಳಿಸುವ ಆಶ್ವಾಸನೆ ನೀಡಿದರು

ಪ್ರಾರಂಭದಲ್ಲಿ ಯುವ ರೈತ ವಿಜಯರಂಗ ಡಿಸೆಂಬರ್ 24ರಂದು ತಪಸ್‌ರವರು ತಿಳಿಸಿದ್ದ ವಿಷಯಗಳನ್ನು ಸ್ಥೂಲವಾಗಿ ಪರಿಚಯಿಸಿದರು. ನೆರೆದ ರೈತರು ಅಡಿಕೆ ಸುಲಿತದ ಯಂತ್ರದ ಅಭಿವೃದ್ಧಿ ಕಾರ್ಯದ ಬಗ್ಗೆ, ಹಳದಿ ರೋಗ ನಿಯಂತ್ರಣದ ಬಗ್ಗೆ ವ್ಯಾಪಕವಾಗಿ ಚರ್ಚಿಸಿದರು. ಮಲೆನಾಡ ಸಸ್ಯ ಸಂಪತ್ತನ್ನು ಕಾಪಾಡಿಕೊಂಡು ಬರುವ ವಿಶೇಷ ಬಿ. ಎಸ್. ವಿಠಲರಾವ್ ತಮ್ಮ ಪ್ರಯತ್ನವನ್ನು ವಿವರಿಸಿದರು.

ಹತ್ತಿಕೊಡಿಗೆಯ ಎಚ್. ನಂಜುಂಡರಾವ್ ಮತ್ತು ಸೋದರರ ತೋಟದ ಸುಂದರ ಪರಿಸರದಲ್ಲಿ ನಡೆದ ಈ ಎರಡು ದಿನಗಳ ಫಲಪ್ರದ, ಸಫಲ ಸಮಾರಂಭಕ್ಕೆ ಎಲ್ಲರನ್ನೂ ಸಿಂಡಿಕೇಟ್ ಬ್ಯಾಂಕಿನ ಗ್ರಾಮೀಣಾಭಿವೃದ್ಧಿ ಅಧಿಕಾರಿ ಶ್ರೀಕಾಂತ್ ಶೆಟ್ಟಿ ಸ್ವಾಗತಿಸಿದರು. ಬ್ಯಾಂಕಿನ ಮೇನೇಜರ್ ಬಿ. ಆರ್. ಪೂಜಾರಿಯವರು ಸಂಘಟಕರ ಪರವಾಗಿ ಧನ್ಯವಾದಗಳನ್ನೂ, ಕಿರು ಕಾಣಿಕೆಯನ್ನೂ ಅರ್ಪಿಸಿದರು. ಜೇಸಿ ವಿಜಯಕುಮಾರ್, ಜೇಸಿ ಕೇಶವರಾವ್ ಹಾಗೂ ಕೃ.ವಿ.ವಿ. ಕೇಂದ್ರದ ಕಾರ್ಯದರ್ಶಿ ಬಿ. ಎಸ್. ಶ್ರೀನಿವಾಸ್‌ರವರು ಕಾರ್ಯಕ್ರಮ ನಿರ್ವಹಿಸುವಲ್ಲಿ ಸಕ್ರಿಯ ಪಾತ್ರ ವಹಿಸಿದರು.

[ವಿಚಾರ ಸಂಕಿರಣದಲ್ಲಿ ಚರ್ಚಿತವಾದ 'ನೈಸರ್ಗಿಕ ಕೃಷಿ' ಕುರಿತ ಪೂರ್ಣ ವಿವರಗಳನ್ನು ಮುಂದೆ ಹಂತ ಹಂತವಾಗಿ ಪ್ರಕಟಿಸಲಾಗುವುದು. ಜೊತೆಗೆ [illegible] ಪ್ರಕಟವಾಗುವ ವ್ಯವಸ್ಥೆ, ವ್ಯವಸ್ಥೆಯ ವಿಚಾರಗಳಿಗಾಗಿ 31-12-89 ಮತ್ತು 14-1-90ರ 'ಮುಂಜಾವು' [illegible] ನೋಡಿರಿ. —ಸಂ.]

## ಉಚಿತ ಮಣ್ಣು ಪರೀಕ್ಷೆ

ಕಮ್ಮರಡಿ: ರೈತರು ತಮ್ಮ ಭೂಮಿಯ ಮಣ್ಣಿನ ಗುಣ–ದೋಷಗಳನ್ನರಿಯದೆ ರಾಸಾಯನಿಕ ಗೊಬ್ಬರ ಬಳಸಬಾರದಾಗಿದ್ದು, ಚಾವಲ್ಮನೆ ಮಂಡಲದ ವ್ಯಾಪ್ತಿಯ ಎಲ್ಲಾ ಗ್ರಾಮಸ್ಥರು ತಮ್ಮ ಜಮೀನುಗಳ ಮಣ್ಣಿನ ಉಚಿತ ಪರೀಕ್ಷೆಗೆ ಮತ್ತು ಸಂಬಂಧಪಟ್ಟ ಎಲ್ಲ ಮಾಹಿತಿಗೆ ನೆರವಾಗುವುದಾಗಿ ಮಂಡಲದ ಕೃಷಿ ಸಹಾಯಕ ಎ.ಎನ್. ಕರಿಯಪ್ಪ ತಿಳಿಸಿದ್ದಾರೆ.

## ಕೂಸಗಲ್ಲು ಜಾತ್ರೆ

ನ.ರಾ. ಪುರ: ಈ ತಾಲ್ಲೂಕಿನ ಸುಪ್ರಸಿದ್ಧ ನಿಸರ್ಗ ರಮಣೀಯ ಕೂಸಗಲ್ಲು ರಂಗನಾಥ ಸ್ವಾಮಿ ಜಾತ್ರೆ ಫೆ. 8 ರಿಂದ 10 ರ ವರೆಗೆ ನಡೆಯಲಿದ್ದು, ಫೆ. 9ರಂದು 'ಗಿರಿ ಹತ್ತುವ' ಕಾರ್ಯಕ್ರಮ ಚಂದ್ರ ಗ್ರಹಣದ ಪ್ರಯುಕ್ತ ಸಂಜೆ 6 ಗಂಟೆಗೇ ಆರಂಭವಾಗುವುದೆಂದು ವ್ಯವಸ್ಥಾಪಕರು ತಿಳಿಸಿದ್ದಾರೆ.

### ಭದ್ರಾ ಜಲಮಾಲಿನ್ಯದ ವಿರುದ್ಧ ಭಾರತ ಕಮ್ಯುನಿಸ್ಟ್ ಪಕ್ಷದಿಂದ

## 'ಕುದುರೆಮುಖ ಅದಿರು ಯೋಜನೆ ಚಲೊ'

ಕಳಸ, ಬಾಳೆಹೊನ್ನೂರು, ಬಾಳೆಹೊಳೆ, ಭದ್ರಾವತಿ, ದಾವಣಗೆರೆ ಇತ್ಯಾದಿ ಲಕ್ಷಾಂತರ ಜನರಿಗೆ ಹಾಗೂ ನೂರಾರು ಕಿ.ಮೀ. ದೂರದ ನದಿ ದಂಡೆಯ ಕೋಟ್ಯಾಂತರ ಜೀವರಾಶಿಗಳಿಗೆ ನೀರಿನ ಆಸರೆಯಾಗಿರುವ ಹಾಗೂ ರಾಜ್ಯದ ಪ್ರಮುಖ ನದಿಗಳಲ್ಲಿ ಒಂದಾದ ಭದ್ರಾ ನದಿಯ ಮಾಲಿನ್ಯದ ವಿರುದ್ಧ ಹೋರಾಟವೊಂದನ್ನು ರೂಪಿಸಲು ಜ. 16 ರಂದು ಕಳಸದಲ್ಲಿ ಸೇರಿದ ಭಾರತ ಕಮ್ಯುನಿಸ್ಟ್ ಪಕ್ಷದ ಕಳಸ ಶಾಖೆಯ ಸಭೆ ನಿರ್ಧರಿಸಿತು. ಸಭೆಯಲ್ಲಿ ಪಕ್ಷದ ಜಿಲ್ಲಾ ಕಾರ್ಯದರ್ಶಿ ಬಿ. ಕೆ. ಸುಂದರೇಶ್ ಹಾಜರಿದ್ದರು.

ಏಷ್ಯಾದ ಅತಿ ದೊಡ್ಡ ಅದಿರು ಯೋಜನೆಯಾದ ಕುದುರೆಮುಖದಿಂದ ಹೊರಬೀಳುವ ಕಲ್ಮಶಗಳಿಂದ ಕೂಡಿದ ಕೆಸರು ನೀರು ಪ್ರತಿ ದಿನ ಹೊಳೆಗೆ ಹರಿಯುತ್ತಿದ್ದು ಜನರ ಆರೋಗ್ಯಕ್ಕೆ ತೀವ್ರ ಹಾನಿಯನ್ನುಂಟು ಮಾಡುತ್ತಿದೆ. ಜಲಚರಗಳು, ನೀರನ್ನು ಉಪಯೋಗಿಸುವ ಪ್ರಾಣಿ ಪಕ್ಷಿಗಳು ತೊಂದರೆಗೊಳಗಾಗುತ್ತಿವೆ. ಹೊಳೆಗೆ ಹರಿಯುವ ನೂರಾರು ಟನ್ ಮಣ್ಣಿನಿಂದ ನದಿಯಲ್ಲಿ ಹೂಳು ತುಂಬುತ್ತಿದೆ.

ಈ ಸಮಸ್ಯೆಯ ಬಗ್ಗೆ ಕೆ.ಐ.ಒ.ಸಿ.ಎಲ್. ಆಡಳಿತದ ಹಾಗೂ ಸರ್ಕಾರದ ಗಮನ ಸೆಳೆಯಲು ಇದೇ ಮಾರ್ಚ್ 17 ಮತ್ತು 18 ರಂದು ಕಳಸದಿಂದ ಸಾವಿರಾರು ಜನರ 'ಕುದುರೆಮುಖ ಅದಿರು ಯೋಜನಾ ಚಲೋ' ಜಾಥಾ ಕಾರ್ಯಕ್ರಮ ನಡೆಸಲು ಪಕ್ಷ ನಿರ್ಧರಿಸಿತು.

**ತಾಲೂಕು ಕೇಂದ್ರ, ರೈತರ ಸಾಲ**

ಕಳಸವನ್ನು ತಾಲ್ಲೂಕು ಕೇಂದ್ರವನ್ನಾಗಿ ಮಾಡಬೇಕೆಂಬ ಈ ಪ್ರದೇಶದ ಜನರ ಬಹು ದಿನದ ಬೇಡಿಕೆಯನ್ನು ಈಡೇರಿಸಬೇಕೆಂದು ಒತ್ತಾಯಿಸಲು ಜನಾಭಿಪ್ರಾಯ ಸಂಗ್ರಹಣೆಗೆ ಪಕ್ಷ ನಿರ್ಧರಿಸಿದೆ. ಅಲ್ಲದೆ ರೈತರ ಸಾಲ ಮನ್ನಾ ಮಾಡಬೇಕೆಂದು ಒತ್ತಾಯಿಸಿ ಕಳಸ ಕೆನರಾ ಬ್ಯಾಂಕಿನೆದುರು ಫೆಬ್ರವರಿ 2ನೇ ತಾರೀಖಿನಂದು ಸತ್ಯಾಗ್ರಹ ನಡೆಸಲೂ ಸಭೆ ನಿರ್ಧರಿಸಿತು.

### ಜಿಲ್ಲಾ ಕ್ರೀಡಾಕೂಟದಲ್ಲಿ ಗ್ರಾಮೀಣ ಎಳೆಯರ

## ಗಮನಾರ್ಹ ಸಾಧನೆ

ಬಿಳಲುಕೊಪ್ಪ: ಇದೇ ತಿಂಗಳು ನಡೆದ ಪ್ರೌಢಶಾಲೆಗಳ ಕ್ರೀಡಾಕೂಟದಲ್ಲಿ ಇಲ್ಲಿನ ಹಿ. ಪ್ರಾ. ಶಾಲೆಯ ವಿದ್ಯಾರ್ಥಿ ಜಯ, (ಕೃಷಿ ಕಾರ್ಮಿಕ ದೂಜ ಇವರ ಮಗ) 100 ಮತ್ತು 200 ಮೀಟರ್ ಓಟದಲ್ಲಿಯೂ, ಸಮೀಪದ ಕಲ್ಲುಗುಡ್ಡೆ ಶಾಲೆಯ ವಿದ್ಯಾರ್ಥಿನಿ ಸುನಂದ ದೂರ ಜಿಗಿತದಲ್ಲೂ ಜಿಲ್ಲೆಗೆ ಪ್ರಥಮ ಸ್ಥಾನ ಪಡೆದು ಜಿಲ್ಲೆಯನ್ನು ರಾಜ್ಯಮಟ್ಟದಲ್ಲಿ ಪ್ರತಿನಿಧಿಸಿದ್ದಾರೆ. ಕಲ್ಲುಗುಡ್ಡೆ ಶಾಲೆಯ ಇನ್ನೊಬ್ಬಳು ವಿದ್ಯಾರ್ಥಿನಿ ಜಿಲ್ಲಾ ಮಟ್ಟದಲ್ಲಿ ಸ್ಥಾನ ಗಳಿಸಿದರೂ ರಾಜ್ಯಮಟ್ಟದ ಸ್ಪರ್ಧೆಗೆ ಆಯ್ಕೆಯಾಗಲಿಲ್ಲ.

ಯಾವುದೇ ರೀತಿಯ ಮಾರ್ಗದರ್ಶನ ಮತ್ತು ಸವಲತ್ತುಗಳು ಇಲ್ಲದೆಯೂ ಈ ಮಕ್ಕಳ ಈ ಸಾಧನೆಗಳು ಮೆಚ್ಚುವಂಥವಾಗಿವೆ. (ವರದಿ: ಕೆ. ವಿ. ಗಣೇಶ ಉಡುಪ)

## ಸಾಮಾನ್ಯ ಜ್ಞಾನ ಪರೀಕ್ಷೆ : ಕೊಪ್ಪ ಸ॥ ಶಾಲೆಗೆ 81%

ಕೊಪ್ಪ: ಕಳೆದ ನವೆಂಬರ್‌ನಲ್ಲಿ ಬೀರೂರಿನ ಚೇತನ ವಿದ್ಯಾಲಯದ ಆಶ್ರಯದಲ್ಲಿ ನಡೆದ ಸಾಮಾನ್ಯ ಜ್ಞಾನ ಪರೀಕ್ಷೆಗೆ ಇಲ್ಲಿನ ಸರ್ಕಾರಿ ಪದವಿ ಪೂರ್ವ ಕಾಲೇಜಿನ 93 ವಿದ್ಯಾರ್ಥಿಗಳು ಕುಳಿತಿದ್ದು 75 ವಿದ್ಯಾರ್ಥಿಗಳು ಉತ್ತೀರ್ಣರಾಗಿ ಶೇ. 81 ಫಲಿತಾಂಶ ಬಂದಿದೆ. (13 ಪ್ರಥಮ, 26 ದ್ವಿತೀಯ 36 ತೃತೀಯ ದರ್ಜೆ). 10ನೇ ತರಗತಿ ವಿದ್ಯಾರ್ಥಿ ಕೆ. ಆರ್. ನಾಗರಾಜನು ಶಾಲೆಗೆ ಅತಿ ಹೆಚ್ಚು (69) ಅಂಕಗಳನ್ನು ಪಡೆದು ಪ್ರೋತ್ಸಾಹ ಬಹುಮಾನ ಪಡೆದಿದ್ದಾನೆ ಎಂದು ಶಾಲೆಯ ಸಹಶಿಕ್ಷಕರಾದ ಬಿ.ಲಕ್ಷ್ಮೀನಾರಾಯಣ ತಿಳಿಸಿದ್ದಾರೆ.

## ಅಣ್ಣಪ್ಪ ಪೈ ಸ್ಮಾರಕ ಸಾಂಸ್ಕೃತಿಕ ಸ್ಪರ್ಧೆಗಳು

ಹರಿಹರಪುರ: ದಿ॥ ಸಿಗದಾಳ್ ಅಣ್ಣಪ್ಪ ಪೈ ಸ್ಮಾರಕ ಎರಡನೆ ವರ್ಷದ ಸಾಂಸ್ಕೃತಿಕ ಸ್ಪರ್ಧೆಗಳು ಜ. 25 ರಂದು ಇಲ್ಲಿನ ಕಿರಿಯ ಕಾಲೇಜಿನಲ್ಲಿನಡೆದವು ಪ್ರಿನ್ಸಿಪಾಲ್ ಎಸ್. ವಿ. ಅಡಿಗರ ಅಧ್ಯಕ್ಷತೆಯಲ್ಲಿ ಎಚ್. ಗೋಪಾಲ ನಾಯಕ್ ಸ್ಪರ್ಧೆಉದ್ಘಾಟಿಸಿದರು. ಎಸ್.ಎ. ವಸಂತ ಕುಮಾರ್ ಪೈ ಮುಖ್ಯ ಅತಿಥಿಯಾಗಿದ್ದರು. ಕಾಲೇಜು ವಿಭಾಗದ ಕ್ವಿಜ್ ಮತ್ತು ಚರ್ಚಾಕೂಟದಲ್ಲಿ ಶಿವಮೊಗ್ಗದ ಡಿ.ವಿ. ಎಸ್. ಮತ್ತು ಹರಿಹರಪುರದ ಕಿರಿಯ ಕಾಲೇಜುಗಳು ಮೇಲುಗೈ ಸಾಧಿಸಿದವು ಪ್ರೌಢಶಾಲಾ ವಿಭಾಗದ ಕ್ವಿಜ್ ಪ್ರಶಸ್ತಿಗಳು ನಾರ್ವೆ ಮತ್ತು ಸಂಗಮೇಶ್ವರಪೇಟೆ ಪಾಲಾದುವು. ಚರ್ಚಾಕೂಟದಲ್ಲಿ ಕೊಪ್ಪದ ಕಾನ್ವೆಂಟ್ ಪ್ರೌಢಶಾಲೆ ಮತ್ತು ನಾರ್ವೆ ಪ್ರೌಢಶಾಲೆ ಪ್ರಶಸ್ತಿ ಪಡೆದವು. ಭಾವಗೀತೆಯಲ್ಲಿ ಹರಿಹರಪುರ ಮತ್ತು ಕೊಪ್ಪ ಕಿರಿಯ ಕಾಲೇಜಿನವರದು ಮೇಲುಗೈ ಆಯಿತು.

ಶಾಸಕ ಯು.ಕೆ.ಶಾಮಣ್ಣನವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಆರ್ಡಾಕ್ ಎಸ್ಟೇಟ್ ಮಾಲೀಕರಾದ ವಿಜಯ ಆಜಿಲರು ಬಹುಮಾನ ವಿತರಿಸಿದರು. ಕೆ. ಎಸ್. ರಾಮಕೃಷ್ಣ ಉಡುಪ ದಿ॥ ಅಣ್ಣಪ್ಪ ಪೈ ಅವರ ಬದುಕಿನ ಬಗ್ಗೆ ಮಾತನಾಡಿದರು.

ಜ. 24 ರಂದು ಸಂಸ್ಥೆಯ ಕ್ರೀಡೋತ್ಸವ ಮತ್ತು ಪ್ರತಿಭಾಪುರಸ್ಕಾರ ಸ್ವಾಮಿ ಜಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಕೊಪ್ಪ ಪ್ರಥಮ ದರ್ಜೆ ಕಾಲೇಜಿನ ಪ್ರಿನ್ಸಿಪಾಲ್ ನೊ. ಸಂ. ತಿಮ್ಮೇಗೌಡರು ಆದರ್ಶ ಮತ್ತು ವಾಸ್ತವತೆಯ ಬಗೆಗೆ ಮಾತನಾಡಿದರು.

(ವರದಿ: ಅನಿಲ್ ಕುಮಾರ್)

## ಜಯಪುರ ಪ್ರೌಢಶಾಲೆ ಬೇಡಿಕೆಗಳ ಬಗ್ಗೆ

## ಶಾಸಕರ ಭರವಸೆ

ಜಯಪುರ: ಇಲ್ಲಿನ ಪ್ರೌಢಶಾಲೆಗಳ ಬೇಡಿಕೆಗಳ ಬಗ್ಗೆ ಗಮನ ನೀಡುವುದಾಗಿ ಶಾಸಕ ಯು. ಕೆ ಶಾಮಣ್ಣ ಜ. 25 ರಂದು ಶಾಲಾ ವಾರ್ಷಿಕೋತ್ಸವದ ಮುಖ್ಯ ಅತಿಥಿಗಳಾಗಿ ಮಾತನಾಡುತ್ತ ತಿಳಿಸಿದರು. ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ವಿದ್ಯಾರ್ಥಿಗಳಲ್ಲಿ ಅಧ್ಯಯನ ಶೀಲತೆ, ಚಿಂತನೆ ಅಗತ್ಯವೆಂದು ಅವರು ಅಭಿಪ್ರಾಯಪಟ್ಟರು.

ಶಾಲಾ ಮಕ್ಕಳ ಹಸ್ತ ಪ್ರತಿ 'ಅಮರ ಜ್ಯೋತಿ'ಯನ್ನು ಮಂಡಲ ಪ್ರಧಾನ ಎ.ಸಿ ವಜ್ರಪ್ಪ ಬಿಡುಗಡೆ ಮಾಡಿದರು. ಸ್ಪರ್ಧಾವಿಜೇತರಿಗೆ ತಹಸೀಲ್ದಾರ್ ಜಿ.ಎಸ್. ನಾಯಕ್ ಮತ್ತು ಬಿ. ಜಿ. ಚಿದಂಬರ್ ಬಹುಮಾನ ವಿತರಿಸಿದರು. ಡಾ॥ ಮೊಸಳೆಯವರ ಪರ್ಯಾಯ ಪಾರಿತೋಷಕವನ್ನು ಎಸ್ಸೆಸ್ಸೆಲ್ಸಿಯಲ್ಲಿ 21ನೇ ರ್‍ಯಾಂಕ್ ಪಡೆದ ಕೆ. ಸುನಿಲ್ ಕುಮಾರ್‌ಗೆ ನೀಡಲಾಯಿತು.

ಅಧ್ಯಕ್ಷತೆ ವಹಿಸಿದ್ದ ಜಯಪುರ ವಿದ್ಯಾಸಂಸ್ಥೆ ಅಧ್ಯಕ್ಷ ಕೌಳಿ ಶ್ರೀನಿವಾಸ್ ಶಾಲೆಯ ಅಭಿವೃದ್ಧಿಗೆ ದಾನಿಗಳು ಮುಂದೆ ಬರಬೇಕೆಂದು ಕೋರಿದರು. ಗೌ॥ಕಾರ್ಯದರ್ಶಿ ಅನಂತರಾಮ ಭಟ್ ಸ್ವಾಗತಿಸಿ, ಕೆ. ನಾರಾಯಣ ವಂದಿಸಿದರು.

(ವರದಿ: ಶಂ. ನ. ಶೇಷಗಿರಿ)

## ವಿದ್ಯುಚ್ಛಕ್ತಿ ಕಣ್ಣಾಮುಚ್ಚಾಲೆ ಆಟ !

(3ನೇ ಪುಟದಿಂದ)

ಸೌಕರ್ಯ ಈ ಇಲಾಖೆಯ ಸಾಧನೆ!

ಈ ಊರಲ್ಲಿ ವಿದ್ಯುತ್‌ನಿಂದ ನಡೆಯುವ ಯಾವುದೇ ಕೈಗಾರಿಕೆಗಳೂ ಇಲ್ಲ. ಬೆಳಗ್ಗೆ 5 ಗಂಟೆಗೆ ವಿದ್ಯುತ್ ತೆಗೆಯುವ ಬದಲು ಬೆಳಗ್ಗೆ 7 ರಿಂದ ಸಂಜೆ 7 ರವರೆಗೆ ತೆಗೆದರೆ ಯಾರಿಗೂ ತೊಂದರೆಯಾಗುವುದಿಲ್ಲ.

ಆದ್ದರಿಂದ ಬೇಕಾಬಿಟ್ಟಿ ಪವರ್ ಕಟ್ ಮಾಡಿ ನಾಲ್ಕು ಶಾಲೆಗಳ ಸುಮಾರು ಒಂದು ಸಾವಿರಕ್ಕೂ ಹೆಚ್ಚು ಮಕ್ಕಳ ಜೀವನ ಹಾಳುಮಾಡಬೇಡಿ ಎಂದು ಕ.ವಿ.ಮಂ. ಅಧಿಕಾರಿಗಳಲ್ಲಿ ಅರಿಕೆ.

ಪೋಷಕ ವೃಂದ,

ಬಸರೀಕಟ್ಟೆ.

## ಕ್ರಿಕೆಟ್ ಟೂರ್ನಿ ಆರಂಭ ಒಂದು ದಿನ ಮೊದಲು

ತೆಂಗಿನಮನೆ: ಇಲ್ಲಿನ ಸ್ಟಾರ್ ಸ್ಪೋರ್ಟ್ಸ್ ಅಸೋಸಿಯೇಶನ್ ಆಶ್ರಯದಲ್ಲಿ ಇಲ್ಲಿ ಫೆ. 10 ರಿಂದ ಆರಂಭವಾಗಬೇಕಿದ್ದ ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲಾ ಮಟ್ಟದ ಎ. ಜೆ. ಕುಲಾಸೊ ಸ್ಮಾರಕ ಆಹ್ವಾನ ಕ್ರಿಕೆಟ್ ಟೂರ್ನಿಯನ್ನು ಹೆಚ್ಚು ತಂಡಗಳು ಬಂದಿರುವ ಕಾರಣ ಒಂದು ದಿನ ಮುಂಚಿತವಾಗಿ ಫೆ. 9 ರಿಂದ ಆರಂಭಿಸಲಾಗುವುದೆಂದು ಅಧ್ಯಕ್ಷ ಅನಿಲ್ ಕುಲಾಸೊ ತಿಳಿಸಿದ್ದಾರೆ.

### ಶೃಂಗೇರಿ ಜೆ.ಸಿ.ಬಿ.ಎಂ. ಕಾಲೇಜು ರಾ.ಸೇ.ಯೋ. ಘಟಕದಿಂದ

## ರಾಷ್ಟ್ರೀಯ ಯುವ ಸಪ್ತಾಹ

ಶೃಂಗೇರಿ: ಇಲ್ಲಿನ ಜೆ.ಸಿ.ಬಿ.ಎಂ ಕಾಲೇಜು ರಾಷ್ಟ್ರೀಯ ಸೇವಾ ಯೋಜನೆ ಘಟಕದ ಆಶ್ರಯದಲ್ಲಿ ಈಚೆಗೆ 'ರಾಷ್ಟ್ರೀಯ ಯುವ ಸಪ್ತಾಹ' ವಿಶಿಷ್ಟವಾಗಿ ನಡೆಯಿತು. ಸ॥ ಪ್ರೌಢ ಶಾಲಾ ಮುಖ್ಯೋಪಾಧ್ಯಾಯ ಎಚ್. ಆರ್. ಶೇಷಾಚಲ ಕಾರ್ಯಕ್ರಮ ಉದ್ಘಾಟಿಸಿ, ಈ ಕಾಲೇಜಿನ ರಾ. ಸೇ. ಯೋಜನೆಯ ಸಾಧನೆಗಳನ್ನು ಶ್ಲಾಘಿಸಿದರು.

ಸಮಾರೋಪ ಭಾಷಣ ಮಾಡಿದ ಕ್ಷೇತ್ರಾಭಿವೃದ್ಧಿ ಅಧಿಕಾರಿ ನಾಗಲಿಂಗಯ್ಯ ಅವರು, ಘಟಕ ಈಚೆಗೆ ಏರ್ಪಡಿಸಿದ್ದ ರಕ್ತದಾನ ಶಿಬಿರದಲ್ಲಿ 210 ಜನ ಪಾಲ್ಗೊಂಡಿದ್ದನ್ನು ಉದಹರಿಸಿ, ಈ ಘಟಕ ಇನ್ನು ಮುಂದೆಯೂ ಇದೇ ರೀತಿ ಉಪಯುಕ್ತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲೆಂದರು.

ಸಪ್ತಾಹದುದ್ದಕ್ಕೂ, ಸ್ವಾಮಿ ವಿವೇಕಾನಂದರ ಬಗ್ಗೆ ಉಪನ್ಯಾಸ, ಭಾವಗೀತೆ, ಭಕ್ತಿಗೀತೆ, ಪ್ರಬಂಧ ಮತ್ತು ಆಟೋಟ ಸ್ಪರ್ಧೆಗಳು, ಶ್ರಮದಾನ, ರಕ್ತದಾನದ ಪ್ರಚಾರ, ಶೃಂಗೇರಿ ಜೇಸೀಸ್‌ನ ತರಬೇತುದಾರಿ ಎನ್. ಸಿ. ಪಾಂಡುರಂಗ ಅವರಿಂದ 'ಗೋಲ್ ಸೆಟ್ಟಿಂಗ್ ಕೋರ್ಸ್' ಕುರಿತು ತರಬೇತಿ ಮುಂತಾದ ಕಾರ್ಯಕ್ರಮಗಳನ್ನು ನಡೆಸಲಾಯಿತು.

'ಮುಂಜಾವು' ಚಂದಾ ದರ

ವರ್ಷಕ್ಕೆ ರೂ. 35-00

## ಪೇಟೆ ಧಾರಣೆ

**ಅಡಿಕೆ**

ಶಿವಮೊಗ್ಗ : 3-2-1990
ಸರಕು : 3520–3900
ಬೆಟ್ಟೆ : 2411–2889
ಗೊರಬಲು : 1604–1896

ಸಾಗರ : 1.2.1990
ಇಡಿ : 2206–2676
ಚಾಲಿ : 2326–2446
ಆಪಿ : 3139–3965
ಸಿಪ್ಪೆ ಗೋಟು : 719–1189

**ಏಲಕ್ಕಿ**

ಕೊಪ್ಪ : 3-2-1990
ರಾಶಿ : 300–350

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ, ಸಿರಿಮನೆ ನಾಗರಾಜ್, ಅಚ್ಚು : ದೀಪಪಟಿಗೆ ಅಚ್ಚು ಕೂಟ, ಕೊಪ್ಪ.